ರಿಯ ಎದುರಿಗೆ ಗಂಗೆಯಲ್ಲಿ ಮಾಡಿ, ಪ್ರಸನ್ನವದನನಾದ ಶ್ರೀಕೃಷ್ಣನ ಕರುಣಾಕಟಾಕ್ಷದಿಂದ ಸರ್ವರೊಡನೆ ಸಂಭಾಷಿಸುತ್ತ ಪಟ್ಟಮಹಿಷಿಯೊಡನೆ ಅಭಿಷಿಕ್ತನಾದನು. ಸರ್ವರೂ ಸೋಮಪಾನದಿಂದ ಸಂತುಷ್ಟರಾದರು. ಗಾಯನ ನರ್ತನ ವೇಣುವೀಣಾದಿಗಳೊಡನೆ ವಾದ್ಯರವಗಳು ಮೊರೆಯುತ್ತಿರಲು ಧರ್ಮರಾಯನು ಬಕದಾಲ್ಭ್ಯಖುಷಿಗೆ ನವರತ್ನಖಚಿತವಾದ ಬಂಗಾರದ ಎತ್ತನ್ನೂ, ಒಂದೊಂದು ಆನೆ, ಹತ್ತು ಕುದುರೆ, ಒಂದೊಂದು ರಥ, ಪರಿಜನಚತುಷ್ಟಯವನ್ನೂ ಒಂದೊಂದುಕೊಳಗ ಮುತ್ತುಗಳನ್ನು, ನೂರುಭಾರಹೊನ್ನು ರತ್ನಾಭರಣಗೋಮಹಿಷಿಗಳನ್ನು ಖುತ್ವಿಜರೆಲ್ಲರಿಗೂ ಕೊಟ್ಟು ದ್ವಾರಪಾಲಕರಿಗೂ, ಉಳಿದ ಖುಷಿಮಂಡಲಿಯವರಿಗೂ, ಏನೂ ಕೊರತೆಯಿಲ್ಲದಂತೆ ಸಕಲ ವಸ್ತುಗಳನ್ನು ಕೊಟ್ಟು ಉಪಚರಿಸಿ ಅವರ ಆಶೀರ್ವಾದವನ್ನು ಪಡೆದು ಭೂಪಾಲಕರನ್ನು ವಂದಿಸಿ ಪ್ರತಿಯೊಬ್ಬರಿಗೂ ಸಾವಿರ ಕುದುರೆ, ಹತ್ತುಸಾವಿರಾನೆ, ಒಂದುಕೋಟಿ ಸುವರ್ಣ, ರತ್ನಕಿರೀಟ ಮಣಿಕುಂಡಲ, ದಿವ್ಯಾಂಬರಾಭರಣಗಳನ್ನು ಕೊಟ್ಟು ಮನ್ನಿಸಿ, ರುಕ್ಮಿಣಿ ಮೊದಲಾದ ದೇವರಾಣಿಯರಿಗೆ ಬೇಕಾದ ಉಡುಗೆರೆಗಳನ್ನು ಕೊಟ್ಟು ವಿನಯವಂತನಾಗಿ, ಸರ್ವಜನರಿಂದೊಡಗೂಡಿ, ಧರ್ಮರಾಯನು ಶ್ರೀಹರಿಯನ್ನು ಸಿಂಹಾಸನದಮೇಲೆ ಕುಳ್ಳಿರಿಸಿ, ಸರ್ವಾಲಂಕಾರಪೂಜೆಗಳಿಂದ ತೃಪ್ತಿಪಡಿಸಿ, ಅಶ್ವಮೇಧಫಲವನ್ನು ಅಚ್ಯುತನಿಗೆ ಧಾರೆಯೆರೆಯಲು, ದೇವದುಂದುಭಿಗಳು ಮೊಳಗಿದವು. ಹೂಮಳೆಯು ಸುರಿಯಿತು. ಶ್ರೀಹರಿಯು ತೃಪ್ತನಾದನು. ಬಳಿಕ ಧರ್ಮರಾಯನು ಒಡಹುಟ್ಟಿದವರೊಡನೆ ಶ್ರೀಹರಿಗೆ ಯಾಗಫಲವನ್ನಿತ್ತು ಉಳಿದ ಯೂಪಗಳಲ್ಲಿ ಕಟ್ಟಿದ್ದ ಪಶುಗಳನ್ನು ಬಿಡಿಸಿ, ಇಂದ್ರತೇಜದಿಂದ ರಾರಾಜಿಸುತ್ತಿದ್ದನು.

ಹೀಗೆ ಅಶ್ವಮೇಧಯಾಗವು ಪೂರೈಸಿದಬಳಿಕ ಭೀಮಸೇನನು ರಾಜರ್ಷಿಮಂಡಲವನ್ನು ಪ್ರಾರ್ಥಿಸಿ ಶ್ರೇಷ್ಠವಾದ ಯಜ್ಞಶಾಲೆಯಲ್ಲಿ ಹಸೆಗಳನ್ನು ಹಾಕಿಸಿ, ರತ್ನದೀಪಗಳನ್ನಿಡಿಸಿ, ಸಕಲಸಂಭ್ರಮದಿಂದಲಂಕರಿಸಿ, ದಿವ್ಯವಾದ ಭಕ್ಷ್ಯಗಳೊಡನೆ ಷಡ್ರಸೋಪೇತವಾದ ಭೋಜನವನ್ನು ಮಾಡಿಸಿ, ತೃಪ್ತರಾದವರಿಗೆ ಗಂಧಮಾಲ್ಯಾಂಬರ ಸುಲೇಪನ ತಾಂಬೂಲಗಳನ್ನಿತ್ತು ದಣಿಸುತ್ತಿರಲು ಸರ್ವರೂ ಆನಂದಭರಿತರಾಗಿ, ಕಮಲಾಕ್ಷನನ್ನು ಕೊಂಡಾಡಿ, ಧರ್ಮರಾಯನ ಮಹಿಮೆಯನ್ನು ವರ್ಣಿಸಿ, ಭೀಮಸೇನನ ಗುಣಗಳನ್ನು ಹೊಗಳಿ, ಅರ್ಜುನನ ಉಚಿತಜ್ಞತೆಯ ವೈಭವವನ್ನು ಸ್ತುತಿಸಿ, ನಕುಲನ ವಿವೇಕವನ್ನು ಮೆಚ್ಚಿಕೊಂಡು ಸಹದೇವನ ಶಾಂತಿಯನ್ನೂ, ಧೌಮ್ಯಖುಷಿಯ ವಿಚಾರವನ್ನೂ, ಭೂಪಾಲಕರ ಐಕ್ಯಮತ್ಯವನ್ನೂ, ಶ್ರೇಷ್ಠವಾದ ಕ್ರತುವನ್ನು ಸ್ತುತಿಸುತ್ತ ಇರುವ ಬ್ರಾಹ್ಮಣರೊಡನೆ ಧರ್ಮರಾಯನು ಯಾಗಮಂಟಪದಲ್ಲಿ ಕುಳಿತು ಬಕದಾಲ್ಭ್ಯಮುನಿ ಕೃಷ್ಣಮೂರ್ತಿ ಮೊದಲಾದವರಿಂದ ಪುಣ್ಯಕಥೆಗಳನ್ನು

ಕೇಳುತ್ತ, ಸಂತೋಷಿಸುತ್ತಿದ್ದು ಉಳಿದ ಪದಾರ್ಥಗಳನ್ನು ಬ್ರಾಹ್ಮಣರಿಗೆ ಸೂರೆಗೊಟ್ಟು ಆನಂದಭರಿತನಾಗಿ ನಗರವನ್ನು ಪ್ರವೇಶ ಮಾಡಿದನು.

ಬಳಿಕ ಧರ್ಮರಾಯನನ್ನು ಹರಿಸಿ ಆತನಿಂದ ಬೀಳ್ಕೊಂಡು ಸರ್ವರೂ ತಂತಮ್ಮ ಸ್ಥಳಗಳಿಗೆ ತೆರಳಿದರು. ಯದುನಾಯಕನಾದ ಶ್ರೀಹರಿಯು ತನ್ನ ಪರಿವಾರದೊಡನೆ ದ್ವಾರಕಿಗೆ ತೆರಳಿದನು. ಅನಂತರದಲ್ಲಿ ಪ್ರಮೀಳೆಯೊಡನೆ ಅನ್ಯೋನ್ಯವಾಗಿರುವಂತೆ ಅರ್ಜುನನಿಗೆ ಉತ್ತರವಾಯಿತು. ಬಳಿಕ ಸರ್ವಜನಾನಂದಕರನಾಗಿ, ತನ್ನನುಜರಿಂದೊಡಗೂಡಿ ತಾಯಿಯಾದ ಕುಂತಿಯು ಸಂತೋಷಿಸುತ್ತಿರಲು, ಆ ಹಸ್ತಿನಾಪುರದಲ್ಲಿ ರಾಜ್ಯಭಾರ ಮಾಡುತ್ತ ಭಾರತಾಗ್ರಣಿಯಾದ ಧರ್ಮರಾಯನು ದೇವಪುರನಿಲಯ ಲಕ್ಷ್ಮೀರಮಣನ ದಯದಿಂದ ತೊಂಭತ್ತು ವರ್ಷಕಾಲ ರಾಜ್ಯವನ್ನಾಳಿ ಸುಖದಿಂದ ಕಾಲವನ್ನು ಕಳೆದನು. ಇಂತಪ್ಪ ದೇವಪುರನಿಲಯ ಲಕ್ಷ್ಮೀಶನಿಗೆ ಅಂಕಿತವಾದ ಅಶ್ವಮೇಧ ಪರ್ವದ ಈ ಭಾರತಕಥೆಯನ್ನು ಜೈಮಿನಿಋಷಿಯು ಜನಮೇಜಯರಾಯನಿಗೆ ವಿವರಿಸಿದ್ದನು ಆ ಕಥೆಯನ್ನು ಸಜ್ಜನಶಿರೋಮಣಿಗಳ ಸಂತೋಷಾಭಿವೃದ್ಧಿಗಾಗಿ ಶ್ರೀಲಕ್ಷ್ಮೀಕಾಂತಲಸದರುಣ ಚರಣ ಸರೋಜ ಯುಗ್ಮ ಮಕರಂದ ಮಧುಕರಾಯಮಾನ ಕಲ್ಯಾಣಪುರೀನಿಲಯ ಕವಿನಾಗೇಶನು ವಚನಪ್ರಬಂಧದಿಂದ ರಚಿಸಿದನು. ಇಂಥ ಪುಣ್ಯಕಥೆಯನ್ನು ಬರೆದೋದುವ ಕೇಳಿ ಹೇಳುವ ಪುಣ್ಯಾತ್ಮರಿಗೆ ಶೋಕಭಯ ಸಂತಾಪಂಗಳಂ ಕಳೆದು ನಿರ್ಮಲವಾದ ಬುದ್ಧಿ ಬಲ ಚಾತುರ್ಯ ಕೀರ್ತಿಸಂತಾನ ಸುಖಗಳನ್ನು ಶ್ರೀಹರಿಯು ಕೊಡುವನೆಂಬಲ್ಲಿಗೆ ಜೈಮಿನಿಭಾರತ ಕಥಾಸಂಗ್ರಹದಲ್ಲಿ ಮೂವತ್ತನಾಲ್ಕನೆಯ ಸಂಧಿ ಸಂಪೂರ್ಣಂ. ಶ್ರೀ ಶ್ರೀ ಶ್ರೀ.



ಕಂದಂ ‖ ಶ್ರೀಪತಿಯೊರ್ವಂ ಕರುಣಿಸೆ |
ತಾಪತ್ರಯಮಳಿದು ಸೌಖ್ಯಮ್ಮೃತರ್ಪವೊಲೀ ‖
ಶ್ರೀಪತಿಯೊಲವಿನ ಜೈಮಿನಿ |
ಸಾಫಲ್ಯದಕಥೆಯೊಳಾರ್ಗೆ ಸೊಗಮುದಿಸದುಪೇಳ್ ‖೧‖

ಕಂದಂ ‖ ಭಾವದೆ ಲಕ್ಷ್ಮೀಶನಪದ |
ಪಾವನಸದ್ಭಕ್ತಿ ತೀವಿ ತುಳುಕಲ್ಕದರಿಂ ‖
ದೀವರ ಜೈಮಿನಿಕಥೆಯಂ |
ಕೇವಲಮೊಸೆ ಬರೆದನಿಂತು ಕವಿನಾಗೇಶಂ ‖೨‖
ಚಂದಿರನಂದದೆ ಸೊಬಗಾ |
ನಂದದಹರಿಯಂತೆ ಲೀಲೆ ಪಾರ್ಥನ ಶೌರ್ಯಂ ‖
ಸುಂದರ ಧರ್ಮಕಥಾಮೃತ |
ಮೊಂದಾಗಿರೆ ಸೊಗಸದಿಹುದೆ ಈಕೃತಿಜಗದೊಳ್ ‖೩‖

